# ತಿರುಪ್ಪಲ್ಲಾಣ್ಡು.

## ಪಾಂಡಿಯಭಟ್ಟರು ಅಪ್ಪಣೇ ಕೊಡಿಸಿದ ತನಿಯನ್.

ಮಿನ್ನಾರ್ತಡಮತಿಳ್ ಶೂೞ್ವಿಲ್ಲಿಪುತ್ತೂರೆನ್ನೊರುಕಾಲ್
ಶೊನ್ನಾರ್ಕೞಱ್ಕಮಲಂಶೂಡಿನೋಂ-ಮುನ್ನಾಳ್
ಕಿೞಿಯಱುತ್ತಾನೆನ್ನುರೈತ್ತೋಂಕೀೞ್ಮೈಯಿನಿಲ್ಶೇರುಂ
ವೞಿಯಱುತ್ತೋಂನೆಂಜಮೇವನ್ದು. ... ... ‖ ೧ ‖

ಪ್ರತಿಪದಾರ್ಥ.

| | | | |
|---|---|---|---|
| ಮಿನ್, ಆರ್ | ... ಪ್ರಕಾಶ ಹೊಂದಿದ | ಎನ್ರು | ... ಎಂದು ಆೞ್ವಾರವರ ಈ ಅದ್ಭುತ ಕಾರ್ಯವನ್ನು |
| ತಡಂ, ಮತಿಲ್ | ... ವಿಶಾಲವಾದ ಕೋಟೆಯಿಂದ | | |
| ಶೂೞ್ | ... ಸುತ್ತಲ್ಪಟ್ಟ | ಉರೈತ್ತೋಂ | ... ಹೇಳಿದೆವು, ಅನುಸಂಧಾನ ಮಾಡಿದೆವು. |
| ವಿಲ್ಲಿಪುತ್ತೂರ್, ಎನ್ರು | ... ಶ್ರೀವಿಲ್ಲಿಪುತ್ತೂರೆಂಬ ಹೆಸರನ್ನು | ಕೀೞ್ಮೈಯಿನಿಲ್ | ... ಅಧಃ ಪತನದಲ್ಲಿ (ಧೂಮ ಮಾರ್ಗದಲ್ಲಿ) |
| ಒರುಕಾಲ್ | .. ಒಂದಾವರ್ತಿ | | |
| ಶೊನ್ನಾರ್ | ... ಉಚ್ಚರಿಸಿದವರ | ಶೇರುಂ | ... ಹೋಗಿ ಸೇರುವ |
| ಕೞಲ್, ಕಮಲಂ | ... ಪಾದ ಕಮಲಗಳನ್ನು | ವೞಿ | ... ಮಾರ್ಗವನ್ನು |
| ಶೂಡಿನೋಂ | ... ಶಿರಸ್ಸಿನಲ್ಲಿ ಧರಿಸಿದೆವು | ಅಱುತ್ತೋಂ | ... ನಾಶಮಾಡಿದೆವು |
| ಮುನ್ನಾಳ್ | ... ಹಿಂದಿನ ಕಾಲದಲ್ಲಿ | ನೆಂಜಮೇ | ... ಮನಸ್ಸೇ |
| ಕಿೞಿ ಅಱುತ್ತಾನ್ | ... ವಿದ್ಯಾಶುಲ್ಕರೂಪವಾದ ಗಂಟನ್ನು ಛೇದಿಸಿ ಕೈಕೊಂಡರು. | ವನ್ದು | ... (ಈ ಆೞ್ವಾರವರ ಆಶ್ರಯಕ್ಕೆ) ಬಂದು |

ದಂಡಾನ್ವಯ ವ್ಯಾಖ್ಯಾನ.

ಪ್ರಕಾಶಮಾನವಾಗಿಯೂ ವಿಶಾಲವಾದ ಕೋಟೆಯಿಂದ ಸುತ್ತಲ್ಪಟ್ಟದ್ದಾಗಿಯೂ ರುವ ದಿವ್ಯಕ್ಷೇತ್ರವಾದ ಶ್ರೀವಿಲ್ಲಿಪುತ್ತೂರೆಂಬ ನಾಮವನ್ನು ಒಂದಾವರ್ತಿ ಉಚ್ಚರಿಸಿದ ಾನುಭಾವರ ಪಾದಕಮಲಗಳನ್ನು ನಾವು ಶಿರೋಭೂಷಣವಾಗಿ ಧರಿಸಿದೆವು. ಇದಲ್ಲದೆ ಕಾಲದಲ್ಲಿ ಪಾಂಡ್ಯದೇಶದ ಧೊರೆಯಾದ ವಲ್ಲಭದೇವರಾಯನಿಂದ ಕಟ್ಟಮಾಡಲ್ಪಟ್ಟಿದ್ದ ಲ್ಕರೂಪವಾದ ನಿಧಿಯ ಮುಡಿಯನ್ನು ತತ್ವಾರ್ಥನಿರ್ಣಯದ ಮೂಲಕ ಛೇದಿಸಿ ಕೈ ಂಡರೆಂದು ಪೆರಿಯಾೞ್ವಾರವರ ಈ ಅದ್ಭುತಕಾರ್ಯವನ್ನು ವಿಶದವಾಗಿ ಕೊಂಡಾಡಿದೆವು. ಆದಕಾರಣ, ಎಲೈ ಮನಸ್ಸೇ, ಈ ಆೞ್ವಾರವರ ಆಶ್ರಯವನ್ನು ಹೊಂದಿ ಅನಿಷ್ಟತರರೂಪವಾದ ಧೂಮಾದಿಮಾರ್ಗದಲ್ಲಿ ಹೋಗುವ ಕ್ರಮವನ್ನು ನಾಶಮಾಡಿದೆವು.

---

We did adorn our head, as a mark of reverence, with the jewel of the lotus-feet of those holy men who once uttered the name of the sacred place "Villiputtūr" surrounded by brilliant and spacious bulwarks and bastions. We also stated that Vishnuchitta, in times of yore, untied and secured the treasure-bag as a reward for his success in disputation. Hence, O mind, taking refuge with this saint, we have entirely blocked up the way of our retrogression through future births.

## ವೃತ್ತ:—ನೇರಿಶೈವೆಣ್ಬಾ.

ಪಾಣ್ಡಿಯನ್ಕೊಣ್ಡಾಡಪ್ಪಟ್ಟರ್ಪಿರಾನ್ವನ್ದಾನೆನ್
ಈಣ್ಡಿಯಶಙ್ಗಮೆಡುತ್ತೂದ—ವೇಣ್ಡಿಯ
ವೇದಙ್ಗಳೋದಿವಿರೈನ್ದುಕಿಳಿಯರುತ್ತಾನ್
ಪಾದಙ್ಗಳ್ಯಾಮುಡೈಯಪತ್ತು. ... |೨|

### ಪ್ರತಿಪದಾರ್ಥ.

| | | | |
|---|---|---|---|
| ಪಾಣ್ಡಿಯನ್ | ... ಪಾಂಡ್ಯಧೊರೆಯಾದ ಶ್ರೀ ವಲ್ಲಭದೇವರಾಯನು | ವೇಣ್ಡಿಯ | ... ಬೇಕಾದ, ಅವಶ್ಯಕವಾದ |
| | | ವೇದಙ್ಗಳ್ | ... ವೇದಾರ್ಥಂಗಳನ್ನು |
| ಕೊಣ್ಡಾಡ | ... ಮೆಚ್ಚಿ ಹೊಗಳಲು | ಓದಿ | ... ಪ್ರತಿಪಾದಿಸಿ |
| ಪಟ್ಟರ್ಪಿರಾನ್ | ... ಕವಿ ಶ್ರೇಷ್ಠರು (ಪೆರಿಯಾಳ್ವಾರವರು) | ವಿರೈನ್ದು | ... ತ್ವರೆಯಿಂದ |
| | | ಕಿಳಿ | ... ನಿಧಿಯ ಗಂಟನ್ನು |
| ವನ್ದಾನ್ ಎನ್ರು. | ... (ಪರತತ್ವನಿರ್ಣಯಮಾಡ ಬೇಕೆಂದು) ಬಿಜಮಾಡಿ ದರು ಎಂದು | ಅರುತ್ತಾನ್ | ... ಛೇದಿಸಿ ಕೈಕೊಂಡ (ವಿಷ್ಣುಚಿತ್ತರ) |
| | | ಪಾದಙ್ಗಳ್ | ... ದಿವ್ಯಪಾದಂಗಳು |
| ಈಣ್ಡಿಯ | ... ಅನೇಕ ವಿಧವಾದ | ಯಾಮ್ | ... ನಾವು |
| ಶಙ್ಗಮ್ | ... ಶಂಖಗಳನ್ನು | ಉಡೈಯ | ... ಹೊಂದತಕ್ಕ |
| ಎಡುತ್ತು, ಊದ | ... ಹಿಡಿದು, ಘಟ್ಟಿಯಾಗಿ ಧ್ವನಿಮಾಡಲು | ಪತ್ತು | ... ಹಿಡಿ (ಆಶ್ರಯ, ಅವಲಂಬ) |

### ದಂಡಾನ್ವಯ ವ್ಯಾಖ್ಯಾನ.

ಪಾಂಡ್ಯದೇಶದ ದೊರೆಯಾದ ಶ್ರೀವಲ್ಲಭದೇವರಾಯನು ತನ್ನಲ್ಲಿಗೆ "ಪಟ್ಟರ್ಪಿರಾನ್" ಎಂದರೆ "ಕವಿಶ್ರೇಷ್ಠರು" ಬಿಜಮಾಡಿದರೆಂದು ಮೆಚ್ಚಿ, ಅವರ ವೈದುಷ್ಯವನ್ನು ಕೊಂಡಾಡುತ್ತಿರಲು, ತದನುಸಾರವಾಗಿ ಅಲ್ಲಿದ್ದವರು ಜಯಸೂಚಕವಾದ ಶಂಖಗಳನ್ನು ಘಟ್ಟಿಯಾಗಿಊದುತ್ತಿದ್ದರು. ಆಗ ವಿಷ್ಣುಚಿತ್ತರು ವೇದದ ತತ್ವಾರ್ಥಂಗಳನ್ನು ಶ್ರುತಿವಾಕ್ಯಗಳಿಂದ ಸ್ಪಷ್ಟಪಡಿಸಿ, ಆ ಧೊರೆಯು ಸ್ವಸ್ತಮಾಡಿಟ್ಟಿದ್ದ ನಿಧಿಯ ಮುಡಿಯನ್ನು ಅಕ್ಕಹೆಯಿಂದ ಸ್ವೀಕರಿಸಿದರು. ಇಂಥಾ ಮಹಾತ್ಮರ ದಿವ್ಯ ಪಾದಂಗಳೇ ನಮಗೆ ಹೊಂದತಕ್ಕ ಆಶ್ರಯ!

---

The Pandya King, Vallabhadévaraya, admiring his genius, and announcing with great eclat that "Pattarpirân," 'the king of the learned' (with which title he honoured him) arrived there to establish the Great Truth, and the by-standers accordingly proclaiming the event with the beat of conches, our saint Vishnuchitta expounded to the audience the fundamental doctrines of the Vedâs with suitable texts, untied the knot of precious stones, and secured as his reward the treasure-bag (*Sulka.*) The feet of such a holy and learned saint are our suitable refuge!

# ಕಾಪ್ಪು.

ವೃತ್ತ:—ವೆಣ್ಬಪ್ಪಾಕ್ಕೈ.

ಪಲ್ಲಾಣ್ಡುಪಲ್ಲಾಣ್ಡು ಪಲ್ಲಾಯಿರತ್ತಾಣ್ಡು
ಪಲಕೋಡಿನೂಱಾಯಿರಮ್ಮುಂ
ಮಲ್ಲಾಣ್ಡತಿಣ್ತೋಳ್ಮಣಿವಣ್ಣಾವುನ್
ಶೆವ್ವಡಿಶೆವ್ವಿತಿರುಕ್ಕಾಪ್ಪು. ... ... ‖ ೪ ‖

ಪ್ರತಿಪದಾರ್ಥ.

| | | | |
|---|---|---|---|
| ಪಲ್ಲಾಣ್ಡು | ... ಮಂಗಳಂ | ಮಣಿವಣ್ಣಾ | ... ನೀಲರತ್ನದೋಪಾದಿಯಲ್ಲಿ ಅವಯುವ ಸೌಂದರ್ಯವನ್ನುಳ್ಳವನೇ |
| ಪಲ್ಲಾಣ್ಡು | ... ಮಂಗಳಂ | | |
| ಪಲ್ಲಾಯಿರತ್ತಾಣ್ಡು | ... ಅನೇಕ ಸಹಸ್ರ ವರ್ಷಂಗಳುಂ | | |
| ಪಲಕೋಡಿ ನೂಱಾಯಿರಮ್ಮುಂ | ... ಕಾಲತತ್ವ ಇರುವವರೆಗೂ | ಉನ | ... ನಿನ್ನ |
| ಮಲ್, ಆಣ್ಡ | ... ಮಲ್ಲರನ್ನು ಅಡಗಿಸಿದ | ಶೆವ್, ಅಡಿ | ... ಕೆಂಪಗಿರುವ ದಿವ್ಯ ಪಾದಂಗಳ |
| ತಿಣ್, ತೋಳ್ | ... ದೃಢವಾದ ತೋಳುಗಳನ್ನು | ಶೆವ್ವಿ | ... ಸೌಂದರ್ಯಕ್ಕೆ |
| | | ತಿರುಕ್ಕಾಪ್ಪು | ... ಶ್ರೇಷ್ಠವಾದ ರಕ್ಷೆ. |

## ದಂಡಾನ್ವಯ ವ್ಯಾಖ್ಯಾನ.

ಮಂಗಳಂ, ಮಂಗಳಂ ನಿನಗೆ, ಎಲೈ ಸ್ವಾಮಿನಾ! ಬಹುಸಮರ್ಥರಾದ ಚಾಣೂರ ಮುಷ್ಟಿಕಾದ್ಯನೇಕ ಮಲ್ಲರನ್ನು ಅಡಗಿಸಿದ ದೃಢವಾದ ತೋಳುಗಳುಳ್ಳವನೇ! ನೀಲರತ್ನದೋಪಾದಿಯಲ್ಲಿ ಆಪಯುವ ಕಾಂತಿಯುಳ್ಳ ಪರಮಾತ್ಮನೆ, ನಿನಗೆ ಅನೇಕ ಸಹಸ್ರ ವರ್ಷಂಗಳೂ ಮತ್ತು ಕಾಲತತ್ವ ಇರುವವರೆಗೂ ಕ್ಷೇಮ ಉಂಟಾಗಲಿ; ಕೆಂಪಡರ್ದ ನಿನ್ನ ದಿವ್ಯಪಾದಂಗಳ ನಿರವದ್ಯವಾದ ಸೌಂದರ್ಯಕ್ಕೆ ನಿರಪಾಯರಕ್ಷೆ ಉಂಟಾಗಲಿ!

---

Hail! Hail! O Lord! O Thou azure-coloured Almighty, whose strong arms won success in myriads of contests with famous wrestlers (such as Chânûra and others), may Thou prosper for many a thousand year, nay, for all time to come and may safe protection be eternally vouchsafed to the unblemished beauty of Thy soft and sacred red-lotus Feet!

ಅಱುಶೀರ್ಕ್ಕೞಿನೆಡಿಲಾಶಿರಿಯ ವೃತ್ತ.

ಅಡಿಯೋಮೋಡುನಿನ್ನೋಡುಂಪಿರಿವಿನ್ರಿಯಾಯಿರಂಪಲ್ಲಾಣ್ಡು
ವಡಿವಾಯ್ನಿನ್ವಲಮಾರ್ಬಿನಿಲ್ವಾೞ್ಗಿನ್ರಮಙ್ಗೈಯುಂಪಲ್ಲಾಣ್ಡು
ವಡಿವಾರ್ಶೋದಿವಲತ್ತುಱೈಯುಂಶುಡರಾೞಿಯುಂಪಲ್ಲಾಣ್ಡು
ಪಡೈಪೋರ್ಪುಕ್ಕುಮುೞಙ್ಗುಮಪ್ಪಾಞ್ಚಜನ್ನಿಯಮುಂಪಲ್ಲಾಣ್ಡೇ. ॥ ೨ ॥

ಪ್ರತಿಪದಾರ್ಥ.

ಅಡಿಯೋಮೋಡುಂ ... ಶೇಷಭೂತರಾದ ನಮ್ಮಗಳೊಡನೆ
ನಿನ್ನೋಡುಂ ... ಶೇಷಿಯಾಗಿ ವರ್ತಿಸುವ ನಿನ್ನೊಡನೆ (ನಮಗೆ ಈಗಿರುವ ಸಂಬಂಧವು)
ಪಿರಿವು, ಇನ್ರಿ ... ವಿಚ್ಛಿತ್ತಿಯಿಲ್ಲದ ಹಾಗೆ
ಆಯಿರಂ ... ಅನೇಕವಾದ, ಅನಂತವಾದ
ಪಲ್ಲಾಣ್ಡು ... ಮಂಗಳವು (ಆಗಲಿ)
ವಡಿವಾಯ್ ... ಆಭರಣರೂಪವಾಗಿ
ನಿನ ... ಸರ್ವೇಶ್ವರನಾದ ನಿನ್ನ [ದಿ
ವಲಮಾರ್ಬಿನಿಲ್ ... ವಕ್ಷಸ್ಥಳದ ದಕ್ಷಿಣಭಾಗದ
ವಾೞ್ಗಿನ್ರ ... ನಿತ್ಯವಾಸಮಾಡುವ
ಮಙ್ಗೈಯುಂ ... ಲಕ್ಷ್ಮೀದೇವಿಯೂ
ಪಲ್ಲಾಣ್ಡು ... ಮಂಗಳವಾಗಿರಲಿ
ವಡಿವು, ಆರ್ ... ಸೌಂದರ್ಯದಿಂದ ತುಂಬಿದ
ಶೋದಿ ... ತೇಜೋರಾಶಿಯಾಗಿ
ವಲತ್ತು, ಉಱೈಯುಂ ... ನಿನ್ನ ದಕ್ಷಿಣಹಸ್ತದಲ್ಲಿ ಇರುವಂಥಾ
ಶುಡರ್ ... (ಶತ್ರುಗಳನ್ನು) ದಹಿಸುವಂಥಾ
ಆೞಿಯುಂ ... ಚಕ್ರಾಯುಧವೂ
ಪಲ್ಲಾಣ್ಡು ... ಮಂಗಳವಾಗಿರಲಿ
ಪಡೈ ... ಆಯುಧವಾಗಿ
ಪೋರ್ ... ಯುದ್ಧದಲ್ಲಿ
ಪುಕ್ಕು ... ಪ್ರವೇಶಿಸಿ
ಮುೞಙ್ಗುಂ ... ಶಬ್ದಮಾಡುವ
ಅಪ್ಪಾಞ್ಚಜನ್ನಿಯಮುಂ ... ಆ ಪಾಂಚಜನ್ಯವೆಂಬ ಶಂಖವೂ
ಪಲ್ಲಾಣ್ಡೇ ... ಕ್ಷೇಮವಾಗಿರಲಿ

ಪಿಂಡಾನ್ವಯ ವ್ಯಾಖ್ಯಾನ.

ಶೇಷಭೂತರಾದ ನಮಗಳಿಗೂ ಶೇಷಿಯಾಗಿವರ್ತಿಸುವ ನಿನಗೂ, ಎಲೈ ಸ್ವಾಮಿಯೇ, ಇರುವ ಸಂಬಂಧವು ವಿಚ್ಛಿತ್ತಿಯಿಲ್ಲದಹಾಗೆ ಶಾಶ್ವತವಾಗಿರಲಿ! ಸರ್ವೇಶ್ವರನಾದ ನಿನ್ನ ದಿವ್ಯ ವಕ್ಷಸ್ಥಳದ ದಕ್ಷಿಣ ಪಾರ್ಶ್ವದಲ್ಲಿ ಅಲಂಕಾರ ಪ್ರಾಯವಾಗಿ ನಿತ್ಯವಾಸಮಾಡುವ ಲಕ್ಷ್ಮೀದೇವಿಗೆ ಅನಂತವಾದ ಮಂಗಳವಾಗಲಿ! ಸೌಂದರ್ಯಮಯವಾಗಿಯೂ ತೇಜೋರಾಶಿಯಾಗಿಯೂ ದಕ್ಷಿಣಹಸ್ತದಲ್ಲಿ ಕಂಗೊಳಿಸುವಂಥಾ ಶತ್ರುದಾಹಕವಾದ ಚಕ್ರಾಯುಧಕ್ಕೆ ಅವಿಚ್ಛಿನ್ನವಾದ ಮಂಗಳ ಉಂಟಾಗಲಿ! ಸೇನಾನಿಬಿಡವಾದ ಯುದ್ಧರಂಗದಲ್ಲಿ ಶತ್ರುಗಳ ಹೃದಯವು ಒಡೆದುಹೋಗುವಂತೆ ಘೋರ್ಗರೆಯುವ ಪಾಂಚಜನ್ಯವೆಂಬ ಆ ಶಂಖವು ಎಂದೆಂದಿಗೂ ಬಾಳಲಿ!

---

May the relationship subsisting between Thyself and us, Thy faithful devotees, prosp-r for ever and ever! May Thy beloved Consort, Lakshmi, seated always on the right side of Thy handsome Breast, eternally prosper! May Thy Discus, of effulgent glorious rays, and held in Thy beautiful and brilliant Right-hand prosper for ever and ever! And, finally, may Thy Conch, named Pâñchajanyam, causing terror, by its thundering noise, to the (opposing) army in the battlefield, eternally prosper!

ವಾಳಾಟ್ಪಟ್ಟುನಿನ್ನೀರುಳ್ಳೀರೇಲ್ವನ್ದುಮಣ್ಣುಮ್ಮಣಮುಂಕೊಣ್ಮಿನ್
ಕೂಳಾಟ್ಪಟ್ಟುನಿನ್ನೀರ್ಗಳೈಯೆಙ್ಗಳ್ಕುಳುವಿನಿಲ್ಪುಕುತಲೊಟ್ಟೋಂ
ಏಳಾಟ್ಕಾಲುಂಪಳಿಪ್ಪಿಲೋನಾಙ್ಗಳಿರಾಕ್ಕತರ್ವಾಳಿಲಙ್ಗೈ
ಪಾಳಾಳಾಹಪ್ಪಡೈಪ್ಪೊರುತಾನುಕ್ಕುಪ್ಪಲ್ಲಾಣ್ಡುಕೂಱುತುಮೇ. ... ‖ ೬ ‖

ಪ್ರತಿಪದಾರ್ಥ.

| | | | |
|---|---|---|---|
| ವಾಳ್ ಆಳ್ ಪಟ್ಟು ... | ಕೈಂಕರ್ಯರೂಪವಾದ ಭೋಗಕ್ಕೆ ಅಂಗೀಕಾರಪಟ್ಟು | ಪುಕುತಲ್ ಒಟ್ಟೋಂ ... | ಸೇರಲು ಅವಕಾಶ ಕೊಡುವುದಿಲ್ಲ |
| ನಿನ್ನೀರ್ ... | ನೆಲೆಯಾಗಿ ನಿಂತುಕೊಂಡು | ಏಳ್ ಆಳ್ ಕಾಲುಂ ... | ತ್ರಿಸಪ್ತ ಪೂರುಷದಲ್ಲಿಯೂ |
| ಉಳ್ಳೀರೇಲ್ ... | ಇರುವಿರಾದರೆ | ಪಳಿಪ್ಪಿಲೋಂ ... | ನಿಂದಿತರಾದವರಲ್ಲ |
| ವನ್ದು ... | ತ್ವರೆಯಾಗಿ ಬಂದು | ನಾಙ್ಗಳ್ ... | ದಾಸಭೂತರಾದ ನಾವು |
| ಮಣ್ಣುಮ್ ಮಣಮುಂ ... | ಅಂಕುರಾರ್ಪಣಕ್ಕಾಗಿ ಹುತ್ತಿನ ಮಣ್ಣನ್ನೂ ತದನುಗುಣವಾದ ತಿರುಕ್ಕಲ್ಯಾಣೋತ್ಸವಕ್ಕೆ ಅಭಿಮಾನಶಾಲಿಯಾಗಿರುವ ಕೈಂಕರ್ಯ ವೃತ್ತಿಯನ್ನೂ | ಇರಾಕ್ಕತರ್, ವಾಳ್ ... | ರಾಕ್ಷಸರು ವಾಸಮಾಡುತ್ತಿದ್ದ |
| | | ಇಲಙ್ಗೈ ... | ಲಂಕಾರಾಜ್ಯವು |
| | | ಪಾಳ್ ಆಳ್ ಆಹ ... | ಭೂಪ ಇಲ್ಲದೆ ನಾಶವಾಗುವ ಹಾಗೆ |
| | | ಪಡೈ ... | ಸಂಗರದಲ್ಲಿ |
| ಕೊಣ್ಮಿನ್ ... | ಸ್ವೀಕರಿಸಿರಿ | ಪೊರುತಾನುಕ್ಕು ... | ಯುದ್ಧಮಾಡಿದಂಥಾ ಶ್ರೀರಾಮನಿಗೆ |
| ಕೂಳ್ ಆಳ್ ಪಟ್ಟು ... | ಕೂಳಿಗೆ ಅಡಿಯಾಳಾಗಿ | | |
| ನಿನ್ನೀರ್ಗಳೈ ... | ಅಲೆಯುವವರನ್ನು | ಪಲ್ಲಾಣ್ಡು ... | ಮಂಗಳಾಶಾಸನವನ್ನು |
| ಎಙ್ಗಳ್ ಕುಳುವಿನಿಲ್ ... | ಎಮ್ಮ ಸಂಘದಲ್ಲಿ | ಕೂಱುತುಮೇ ... | ಮಾಡೋಣ |

ದಂಡಾನ್ವಯ ವ್ಯಾಖ್ಯಾನ.

ಎಲೈ ಮಹಾಜನಂಗಳಿರಾ, ನೀವು ಸದ್ಗತಿಯನ್ನು ಹೊಂದಲು ಕೈಂಕರ್ಯರೂಪವಾದ ಈ ಭೋಗಕ್ಕೆ ಅಂಗೀಕಾರಪಟ್ಟು ನೆಲೆಯಾಗಿ ನಿಲ್ಲುವಿರಾದರೆ, ನಮ್ಮೊಡನೆ ತ್ವರೆಯಾಗಿ ಬಂದುಸೇರಿ, ನಮ್ಮ ಸ್ವಾಮಿಯ ಕಲ್ಯಾಣೋತ್ಸವಕ್ಕೆ ಪ್ರಥಮತಃ ಮಾಡಬೇಕಾದ ಅಙ್ಕುರಾರ್ಪಣಕ್ಕಾಗಿ ಹುತ್ತಿನ ಮಣ್ಣನ್ನು ತರುವುದು, ಮತ್ತು ಈ ಉತ್ಸವಕ್ಕೆ ಅಭಿಮಾನಶಾಲಿಗಳಾಗಿರುವದು—ಇಂಥಾ ಕೈಙ್ಕರ್ಯವೃತ್ತಿಯನ್ನು ಸ್ವೀಕರಿಸಿರಿ. ಹಾಗಲ್ಲದೆ ನಿಮ್ಮಲ್ಲಿ ಸ್ವೋದರಭರಣಕ್ಕೋಸ್ಕರ ಕೂಳಿಗೆ ಅಡಿಯಾಳಾಗಿ ತಿರುಕೊಂಡು ಅಲೆಯುತಕ್ಕವರನ್ನು ಎಮ್ಮ (ವೈಷ್ಣವ) ಸಂಘದಲ್ಲಿ ಸೇರಿಸಿಕೊಳ್ಳಲಾರೆವು. ಸ್ವಾಮಿಗೆ ದಾಸಭೂತರಾದ ನಾವು ತ್ರಿಸಪ್ತಪೂರುಷದಿಂದಲೂ ಪ್ರಯೋಜನಾಂತರಪರರಾಗಿಯಾಗಲಿ, ಸಾಧನಾಂತರಪರರಾಗಿಯಾಗಲಿ ನಿಂದಿತರಾದವರಲ್ಲ; ದುಷ್ಟರಾಕ್ಷಸರು ವಾಸಮಾಡುತ್ತಿದ್ದ ಲಂಕಾರಾಜ್ಯವು ಅರಾಜಕವಾಗಿ ಹಾಳಾಗುವಂತೆ ಸಂಗರದಲ್ಲಿ ಯುದ್ಧಮಾಡಿದಂಥಾ ಶ್ರೀರಾಮನಿಗೆ ನಾವೆಲ್ಲಾ ಮಂಗಳಾಶಾಸನವನ್ನು ಮಾಡೋಣ ಬನ್ನಿರಿ.

---

Gentlemen, if you are bent upon securing salvation and eternal happiness, join us at once to take up the duties connected with your devotional service. Such of you as are anxious for leading only an epicurean or gluttonous life, caring only for the gratification of low bodily wants, can find no place in our company. For twenty-one generations, we have been free from sin or blame, arising from selfish ends or means. Hence let us join together in chanting Hymns of Benediction to that Great Lord, who successfully fought with the Rákshasás of Lanká so as to cause anarchy and terrible confusion in that Empire.

ಏಡುನಿಲತ್ತಿಲಿಡುವತನ್ಮುನ್ನಂವನ್ದೆಙ್ಗಳ್ಕುೞಾಂಪುಕುನ್ದು
ಕೂಡುಮನಮುಡೈಯೀರ್ಗಳ್ವರಂಪೊೞಿವನ್ದೊಲ್ಲೈಕ್ಕೂಡುಮಿನೊ
ನಾಡುನಗರಮುನನ್ಗಱಿಯನಮೋನಾರಾಯಣಾಯವೆನ್ಱು
ಪಾಡುಮನಮುಡೈಪ್ಪತ್ತರುಳ್ಳೀರ್ವನ್ದುಪಲ್ಲಾಣ್ಡುಕೂಱುಮಿನೇ. ॥ ೪ ॥

ಪ್ರತಿಪದಾರ್ಥ.

| | | | |
|---|---|---|---|
| ಏಡು | ... ಸ್ಥೂಲಸೂಕ್ಷ್ಮರೂಪವಾದ ಶರೀರವು | ವನ್ದು ಒಲ್ಲೈ | ... ಜಾಗ್ರತೆಯಾಗಿ ಬಂದು |
| | | ಕೂಡುಮಿನೊ | ... ಸೇರಿರಿ |
| ನಿಲತ್ತಿಲ್ | ... ಸ್ವಕಾರಣವಾದ ಮೂಲ ಪ್ರಕೃತಿಯಲ್ಲಿ | ನಾಡುಂ | ... ಅಲ್ಪಜ್ಞಾನಿಗಳಾದವರೂ |
| | | ನಗರಮುಂ | ... ವಿಶೇಷಜ್ಞಾನಿಗಳಾದವರೂ |
| ಇಡುವದನ್ಮುನ್ನಂ | ... ಲಯವಾಗುವುದಕ್ಕೆ ಮುಂ | ನನ್ಗು ಅಱಿಯ | ... ಚೆನ್ನಾಗಿ ಅರಿಯುವಹಾಗೆ |
| ವನ್ದು | ... ಬಂದು | ನಮೋನಾರಾಯಣಾಯ ಎನ್ಱು | ... "ನಮೋನಾರಾಯಣಾಯ" ಎಂದು (ಗಟ್ಟಿಯಾಗಿ) |
| ಎಙ್ಗಳ್ಕುೞಾಂ | ... ಅನನ್ಯ ಪ್ರಯೋಜನರಾದ ನಮ್ಮ ಸಂಘವನ್ನು | ಪಾಡುಂ | ... ಹಾಡುವ |
| ಪುಕುನ್ದು | ... ಪ್ರವೇಶಿಸಿ | ಮನಮುಡೈ | ... ಅಭಿಪ್ರಾಯವುಳ್ಳ |
| ಕೂಡುಂ, ಮನಂ | ... ಸೇರಿಕೊಳ್ಳಬೇಕೆಂಬ ಮನಸ್ಸನ್ನು | ಪತ್ತರುಳ್ಳೀರ್ | ... ಅಕ್ಕರೆಯುಳ್ಳವರಾದರೆ |
| | | ವನ್ದು | ... ನಮ್ಮೊಡನೆ ಸೇರಿ |
| ಉಡೈಯೀರ್ಗಳ್ | ... ಉಳ್ಳವರಾದರೆ | ಪಲ್ಲಾಣ್ಡು | ... ಮಂಗಳಾಶಾಸನವನ್ನು |
| ವರಂಪು ಒೞಿ | ... ನೀವು ಮಾಡಿಕೊಂಡಿರುವ ಎಲ್ಲೆಯನ್ನು ಬಿಸುಟು | ಕೂಱುಮಿನೇ | ... ಹೇಳುವಿರಾಗಿರಿ |

ದಂಡಾನ್ವಯ ವ್ಯಾಖ್ಯಾನ.

ಎಲೈ ಮಹಾಜನಂಗಳಿರಾ, ಸ್ಥೂಲ ಸೂಕ್ಷ್ಮರೂಪವಾದ ಈ ನಿಮ್ಮ ಶರೀರಂಗಳು ನಿರ್ಯಾಣಸಮಯದಲ್ಲಿ ತಮಗಳಿಗೆ ಕಾರಣಭೂತವಾದ ಮೂಲಪ್ರಕೃತಿಯಲ್ಲಿ ಲಯವಾಗುವುದಕ್ಕೆ ಮುಂಚೆಯೇ, ಅನನ್ಯಪ್ರಯೋಜನರಾದ ನಮ್ಮ ಸಂಘವನ್ನು ಸೇರಿಕೊಳ್ಳಬೇಕೆಂದು ನೀವು ಅಭಿಪ್ರಾಯವುಳ್ಳವರಾದರೆ, ಅಲ್ಪವಾದ ಕೈವಲ್ಯಸುಖವೆಂಬ ಎಲ್ಲೆಯನ್ನು ಬಿಸುಟು, ನಿತ್ಯವಾದ ಭಗವದ್ಗುಣಾನುಭವ ಸೌಖ್ಯವನ್ನು ಅನುಭವಿಸಲು ನಮ್ಮೊಡನೆ ಜಾಗ್ರತೆಯಾಗಿ ಬಂದು ಸೇರಿರಿ. ನಾಡುಗಳಲ್ಲಿರುವ ಅಲ್ಪ ಜ್ಞಾನಿಗಳೂ ನಗರದಲ್ಲಿ ವಾಸಮಾಡುವ ವಿಶೇಷ ಜ್ಞಾನಿಗಳೂ ಚೆನ್ನಾಗಿ ಅರಿತು ತನ್ಮೂಲಕ ಉಜ್ಜೀವಿಸುವಹಾಗೆ "ನಮೋ ನಾರಾಯಣಾಯ" ಎಂದು ಗಟ್ಟಿಯಾಗಿ ಅಕ್ಕರೆಯಿಂದ ಹಾಡುವ ಮನಸ್ಸುಳ್ಳವರಾದರೆ, ನೀವು ತ್ವರೆಯಾಗಿ ನಮ್ಮೊಡನೆ ಸೇರಿ ಸರ್ವೇಶ್ವರನಾದ ನಮ್ಮ ಸ್ವಾಮಿಗೆ ಮಂಗಳಾಶಾಸನವನ್ನು ಮಾಡುವಿರಾಗಿರಿ.

---

Gentlemen, before your gross material body as well as your spiritual body is absorbed in that Mûlaprakriti—the primeval Cause of Creation, if you are bent upon joining our company—a company of disinterested workers devoted to the service of the Lord, come at once and associate with us, giving up temporal pleasures of Kaivalya, in preference to the *eternal happiness* and enjoyment of the celestial world—Vaikuntha. You devotees, who have to proclaim loudly the holy expression "Namô Nârâyanâya," so that all-from the ignorant, living in the country, to the most learned in the city-may clearly understand the same, come forward soon to sing Hymns of Benediction to our Lord.

ಅಣ್ಡಕ್ಕುಲತ್ತುಕ್ಕಧಿಪತಿಯಾಕಿಯಸುರರಿರಾಕ್ಕದರೈ
ಯಿಣ್ಡಕ್ಕುಲತ್ತೈಯೆಡುತ್ತುಕ್ಕಳೈನ್ದವಿರುಡೀಕೇಶನ್ಱನಕ್ಕು
ತೊಣ್ಡಕ್ಕುಲತ್ತಿಲುಳ್ಳೀರ್ವನ್ದಡಿತೊೞುದಾಯಿರನಾಮಞ್ಚೊಲ್ಲಿ
ಪ್ಪಣ್ಡೈಕ್ಕುಲತ್ತೈತ್ತವಿರ್ನ್ದುಪಲ್ಲಾಣ್ಡುಪಲ್ಲಾಯಿರತ್ತಾಣ್ಡೆನ್ಮಿನೇ. ॥ ೮ ॥

ಪ್ರತಿಪದಾರ್ಥ.

| | | | |
|---|---|---|---|
| ಅಣ್ಡಕ್ಕುಲತ್ತುಕ್ಕು | .. ಬ್ರಹ್ಮಾಂಡ ಸಮೂಹಕ್ಕೆ | ವನ್ದು | ... (ನಮ್ಮಲ್ಲಿ) ಬಂದು |
| ಅಧಿಪತಿ ಆಗಿ | ... ಅಧಿಪತಿಯಾಗಿ | ಅಡಿತೊೞುದು | ... ಸ್ವಾಮಿಯ ದಿವ್ಯಪಾದಂಗಳನ್ನು ಸೇವಿಸಿ |
| ಅಸುರರ್, ಇರಾಕ್ಕದರೈ .. | ಅಸುರರು, ಮತ್ತು ರಾಕ್ಷಸರು—ಅವರ | ಆಯಿರನಾಮಂ | ... ಅವನ ದಿವ್ಯನಾಮಂಗಳೆಲ್ಲವನ್ನು |
| ಇಣ್ಡಕ್ಕುಲತ್ತೈ | ... ನಿಬಿಡವಾದ ಸಮೂಹಂಗಳನ್ನು | ಚೊಲ್ಲಿ | ... ಅನುಸನ್ಧಾನಮಾಡಿ |
| ಎಡುತ್ತು | ... ಎತ್ತಿ ಸೇರಿಸಿ | ಪಣ್ಡೈಕ್ಕುಲತ್ತೈ | ... ಭಗವದ್ವಿಮುಖರಾಗಿದ್ದ ನಿಮ್ಮ ಪೂರ್ವದ ಜಾತಿ ಕ್ರಮವನ್ನು |
| ಕಳೈನ್ದ | ... ನಿರ್ಮೂಲವಾಗಿನಾಶಮಾಡಿದ | ತವಿರ್ನ್ದು | ... ಬಿಟ್ಟು |
| ಇರುಡೀಕೇಶನ್, ತನಕ್ಕು .. | (ಇಂದ್ರಿಯ ನಿಯಾಮಕನಾದ) ಸರ್ವೇಶ್ವರನಿಗೆ | ಪಲ್ಲಾಣ್ಡು | ... ಬಾಳು |
| ತೊಣ್ಡಕ್ಕುಲತ್ತಿಲ್ | ... ಕೈಂಕರ್ಯವೃತ್ತಿಯನ್ನು ಕೈಕೊಳ್ಳುವ ಕಾಲದಲ್ಲಿ | ಪಲ್ಲಾಯಿರತ್ತಾಣ್ಡು | . ಅನೇಕ ಸಂವತ್ಸರಗಳು |
| ಉಳ್ಳೀರ್ | ... ಇರುವ ನೀವು | ಎನ್ಮಿನೇ | ... ಎಂದು ಹೇಳಿರಿ |

ದಂಡಾನ್ವಯ ವ್ಯಾಖ್ಯಾನ.

ಬ್ರಹ್ಮಾಂಡಕುಲಕ್ಕೆಲ್ಲಾ ಅಧಿಪತಿಯಾಗಿ, ಅಸುರರಾಕ್ಷಸ ಮುಂತಾದ ನಿಬಿಡ ಸಮೂಹಂಗಳನ್ನು ಒಟ್ಟಿಗೆ ನಿರ್ಮೂಲವಾಗಿ ನಾಶಮಾಡಿದ ಸರ್ವೇಶ್ವರನಲ್ಲಿ ಕೈಂಕರ್ಯ ವೃತ್ತಿಯನ್ನು ಕೈಕೊಳ್ಳುವ ಅಭಿಜಾತಕುಲದಲ್ಲಿರುವ ಮಹಾಜನಂಗಳೇ, ನೀವು ತ್ವರೆಯಾಗಿ ಬಂದು ನಮ್ಮೊಡನೆ ಸೇರಿ, ಸ್ವಾಮಿಯ ದಿವ್ಯಪಾದಂಗಳಿಗೆರಗಿ ಅವನ ದಿವ್ಯನಾಮಂಗಳೆಲ್ಲವನ್ನೂ ಅನುಸಂಧಾನಮಾಡಿ, ಭಗವದ್ವಿಮುಖರಾಗಿಯೂ ದೇಹಾತ್ಮಾಭಿಮಾನಿಗಳಾಗಿಯೂ ಇದ್ದ ನಿಮ್ಮಗಳ ಪೂರ್ವದ ಜಾತಿಯ ಆಚಾರಕ್ರಮವನ್ನು ಬಿಟ್ಟು ಸರ್ವಸ್ವಾಮಿಯಾದ ನಾರಾಯಣನನ್ನು "ಅನೇಕ ಸಂವತ್ಸರಗಳು ಬಾಳು" ಎಂದು ಮಂಗಳಾಶಾಸನವನ್ನು ಮಾಡಿರಿ.

---

You, who are members of the saintly clan *i.e.*, devotees to our Lord, join us and make obeisance to the Holy Feet of the Almighty Hrisheekésa, who destroyed root-and-branch thick myriads of the wicked Asurâs and Râkshasâs; also repeat His excellent thousand Names; and after separating yourselves from your ignorant former clan, associate with us to offer Hymns of Benediction, praying for His Eternal Happiness for many a thousand year *i.e.*, for ever and ever!

ಎನ್ದೈತನ್ದೈತನ್ದೈತನ್ದೈತಮ್ಮೂತ್ತಪ್ಪನೇೞ್ಪಡಿಕಾಲ್ತೊಡಙ್ಗಿ
ವನ್ದುವೞಿವೞಿಯಾಟ್ಚೆಯ್ಗಿನ್ಱೋಂತಿರುವೋಣತ್ತಿರುವಿೞವಿ
ಲನ್ದಿಯಂಬೋದಿಲರಿಯುರುವಾಗಿಯರಿಯೈಯೞಿತ್ತವನೈ
ಪ್ಪನ್ದನೈತೀರಪ್ಪಲ್ಲಾಣ್ಡುಪಲ್ಲಾಯಿರತ್ತಾಣ್ಡೆನ್ಱುಪಾಡುತುಮೇ ॥ ೯ ॥

### ಪ್ರತಿಪದಾರ್ಥ.

ಎನ್ದೈ ... ನಾನೂ ನಮ್ಮ ತಂದೆಯೂ
ತನ್ದೈ ... ಅವನಿಗೆ ಜನಕನು (ನಮ್ಮ ಪಿತಾಮಹ)
ತನ್ದೈ ... ಅವನಿಗೆ ಪಿತೃವು (ನಮ್ಮ ಪ್ರಪಿತಾಮಹ)
ತನ್ದೈ ... ಅವನಿಗೆ ಜನಕನು (ನಮ್ಮ ವೃದ್ಧ ಪ್ರಪಿತಾಮಹನು)
ತಮ್ಮೂತ್ತಪ್ಪನ್ ... ಅವನ ಪಿತನೂ ಮತ್ತು ಪಿತಾಮಹನೂ
ಏೞ್ಪಡಿಕಾಲ್ತೊಡಙ್ಗಿ ... ಏಳುತಲೆಮೊಱೆ ಮೊದಲುಗೊಂಡು
ವನ್ದು ... ಬಂದು
ವೞಿವೞಿ ... ಕ್ರಮಕ್ರಮವಾಗಿ
ಆಳ್ ಶೆಯ್ಗಿನ್ಱೋಂ ... ತಪ್ಪದೆ ಕೈಂಕರ್ಯವೃತ್ತಿಯನ್ನು ವಹಿಸಿರುವೆವು
ತಿರುವೋಣತ್ತಿರು ವಿೞವಿಲ್ ... ಶ್ರವಣನಕ್ಷತ್ರದ ಮಹೋತ್ಸವದಲ್ಲಿ
ಅನ್ದಿಯಂಬೋದಿಲ್ ... (ರಾಕ್ಷಸರಿಗೆ ವಿಶೇಷ ಬಲವಿರುವಕಾಲವಾದ) ಸಾಯಂಕಾಲದಲ್ಲಿಯೇ
ಅರಿ ಉರುವಾಗಿ ... ನರಸಿಂಹರೂಪವಾಗಿ
ಅರಿಯೈ ... ಆಶ್ರಿತನಾದ ಪ್ರಹ್ಲಾದನಿಗೆ ಶತ್ರುವಾದ ಹಿರಣ್ಯಕಶಿಪುವನ್ನು
ಅೞಿತ್ತವನೈ ... ನಾಶಮಾಡಿದ ಸರ್ವೇಶ್ವರನನ್ನು
ಪನ್ದನೈತೀರ ... ನಮ್ಮ ಸಂಸಾರಬಂಧವೂ ತೀರುವಹಾಗೆ
ಪಲ್ಲಾಣ್ಡು ... ಬಾಳು
ಪಲ್ಲಾಯಿರತ್ತಾಣ್ಡು ... ಅನೇಕ ಸಹಸ್ರವರ್ಷಂಗಳು
ಎನ್ಱು ... ಎಂಬದಾಗಿ
ಪಾಡುತುಮೇ ... ಮಂಗಲಾಶಾಸನವನ್ನು ಹೇಳೋಣ (ಬನ್ನಿರಿ)

### ತಾತ್ಪರ್ಯ.

ಎಲೈ ಮಹಾಜನಂಗಳಿರಾ, ನನ್ನ ಅಜನೇ ತಾತ ಮೊದಲುಗೊಂಡು ನನ್ನವರಿಗೂ ಆಗುವ ಏಳುತಲೆಮೊಱೆಯಿಂದಲೂ ಜಗತ್ಪತಿಯಾದ ಸರ್ವೇಶ್ವರನಿಗೆ ಕ್ರಮಕ್ರಮವಾಗಿ ಮಂಗಳಾಶಾಸನವನ್ನು ಆಯಾಕಾಲಕ್ಕೆ ಸರಿಯಾಗಿ ಮಾಡಿಕೊಂಡು ಬಂದು ತಪ್ಪದೆ ಅವನ ಕೈಂಕರ್ಯವೃತ್ತಿಯನ್ನು ವಹಿಸುತ್ತಾ ಇರುವೆವು. ಸ್ವಾಮಿಯು ಭೂಮಿಯಲ್ಲಿ ಭೂಭಾರಾವತರಣಕ್ಕಾಗಿ ಶ್ರವಣ ನಕ್ಷತ್ರದ ಮಹೋತ್ಸವದೊಳು, ಶತ್ರುಗಳಾದ ರಾಕ್ಷಸರಿಗೆ ವಿಶೇಷ ಬಲವಿರುವಕಾಲವಾದ ಸಾಯಂಕಾಲದಲ್ಲಿಯೇ, ನರಸಿಂಹರೂಪವಾಗಿ ಅವತರಿಸಿ, ತನ್ನ ಆಶ್ರಿತನಾದ ಪ್ರಹ್ಲಾದನಿಗೆ ಶತ್ರುವಾದ ಹಿರಣ್ಯಕಶಿಪುವನ್ನು ನಾಶಮಾಡಿದ ನಾರಾಯಣನಿಗೆ, ನಮ್ಮ ಸಂಸಾರಬಂಧವು ತೀರುವಂತೆ "ಅನೇಕ ಸಹಸ್ರ ವರ್ಷಂಗಳು ಬಾಳು" ಎಂದು ಮಂಗಳಾಶಾಸನವನ್ನು ಹೇಳೋಣ ಬನ್ನಿರಿ.

---

My ancestors of seven generations—from the sixth in degree down to myself—have been devoting in perpetuity our humble services to our Lord; Hence, gentlemen, let us all unite to offer hymns of benediction to the Almighty God, who, incarnating as Narasimha, destroyed the enemy, Hiranyakasipu, (and thus saved His devotee Prahlâda) on the day of Sravaṇa asterism in the evening twilight; and let us pray for His Eternal Bliss so that our worldly bond of births may be entirely destroyed.

ತೀಯಿಱ್ಪೊಲಿಕಿನ್ರಶೆಞ್ಜುಡರಾೞಿತಿಗೞ್ತಿರುಚ್ಚಕ್ಕರತ್ತಿನ್
ಕೋಯಿಱ್ಪೊಱಿಯಾಲೇಯೊಱ್ಱುಣ್ಡುನಿನ್ರುಕುಡಿಕುಡಿಯಾಟ್ಚೆಯ್ಗಿನ್ರೋಂ
ಮಾಯಪ್ಪೊರುಪಡೈವಾಣನೈಯಾಯಿರನ್ದೋಳುಂಪೊೞಿಕುರುದಿ
ಪಾಯಚ್ಚುೞಱ್ಱಿಯವಾೞಿವಲ್ಲಾನುಕ್ಕುಪ್ಪಲ್ಲಾಣ್ಡುಕೂಱುದುಮೇ ‖ ೧೦ ‖

ಪ್ರತಿಪದಾರ್ಥ.

| | | | |
|---|---|---|---|
| ತೀಯಿಲ್ | ... ಚಂದ್ರಾದಿತ್ಯಾಗ್ನಿಗಳಿಗಿಂತಲೂ | ಮಾಯಂ | ... ವಂಚನೆಯಿಂದ |
| ಪೊಲಿಕಿನ್ರ | ... ಅಧಿಕವಾಗಿ ಪ್ರಕಾಶಿಸುವ | ಪೊಱು | ... ಯುದ್ಧಮಾಡುವ |
| ಶೆಂ | ... ಕೆಂಪಾದ, ಸುವರ್ಣವರ್ಣದ | ಪಡೈವಾಣನೈ | ... ಸೈನ್ಯವುಳ್ಳ ಬಾಣಾಸುರನ |
| ಶುಡರ್ | ... ಜ್ಯೋತಿರ್ಮಯವಾಗಿ | ಆಯಿರಂ ತೋಳುಂ | ... ಸಾವಿರ ಕೈಗಳಿಂದಲೂ |
| ಆೞಿ | ... ಮಂಡಲಾಕಾರವಾಗಿ | ಪೊೞಿಕುರುದಿಪಾಯ | ... ರಕ್ತಪ್ರವಾಹ ಹೊಳೆಯಾಗಿ ಹರಿಯುವಂತೆ |
| ತಿಗೞ್ | ... ಬೆಳಗುವ | ಶುೞಱ್ಱಿಯ | .... ಸುತ್ತಿ ಎಸೆಯಲ್ಪಟ್ಟ |
| ತಿರುಚ್ಚಕ್ಕರತ್ತಿನ್ | ... ಶ್ರೀಚಕ್ರಾಳ್ವಾರವರ | ಆೞಿ | ... ಶ್ರೀಚಕ್ರಾಯುಧವನ್ನು (ನಿಯಮಿಸುವದರಲ್ಲಿ) |
| ಕೋಯಿಲ್ | ... ವಾಸಸ್ಥಾನವಾದ | | |
| ಪೊಱಿಯಾಲೆ | ... ಮುದ್ರೆಯಿಂದ | ವಲ್ಲಾನುಕ್ಕು | .... ಸಮರ್ಥನಾದ ಸರ್ವೇಶ್ವರನಿಗೆ |
| ಒಱ್ಱುಣ್ಡುನಿನ್ರು | ... ಚಿಹ್ನಿತರಾಗಿ ನಿಂತು | | |
| ಕುಡಿಕುಡಿ | ... ಪರಂಪರೆಯಾಗಿ | ಪಲ್ಲಾಣ್ಡು | .... ಮಂಗಲಾಶಾಸನವನ್ನು |
| ಆಳ್, ಶೆಯ್ಗಿನ್ರೋಂ | ... ಕಿಂಕರಭಾವವನ್ನು ವಹಿಸಿ ಬಂದಿರುತ್ತೇವೆ | ಕೂಱುದುಮೇ | .... ಹಾಡೋಣ, ಹೇಳೋಣ |

ತಾತ್ಪರ್ಯ.

ಎಲೈ ಮಹಾಜನಂಗಳಿರಾ, ಚಂದ್ರಾದಿತ್ಯಾಗ್ನಿಗಳಿಗಿಂತಲೂ ಅಧಿಕ ಪ್ರಕಾಶವುಳ್ಳವರಾಗಿಯೂ ಸುವರ್ಣ ಜ್ಯೋತಿರ್ಮಯರಾಗಿಯೂ ಇರುವ ಚಕ್ರಾಳ್ವಾರವರಿಗೆ ಆ ವಾಸಸ್ಥಾನವಾದ ಮಂಡಲಾಕಾರದ ಮುದ್ರೆಯಿಂದ ಚಿಹ್ನಿತರಾಗಿ ನಿಂತು ಕುಲಕ್ರಮಾಗತವಾಗಿ ನಮ್ಮ ಸ್ವಾಮಿಗೆ ಕಿಂಕರಭಾವವನ್ನು ವಹಿಸಿ ಊಳಿಯವನ್ನು ತಪ್ಪದೆ ಮಾಡುತ್ತಾ ಬಂದಿರುತ್ತೇವೆ ಆದಕಾರಣ ಮಾಯಮಾಯುದ್ಧ ಮಾಡುವ ಸೈನ್ಯವುಳ್ಳ ಬಾಣಾಸುರನ ಸಹಸ್ರಬಾಹುಗಳನ್ನು ಖಂಡಿಸಿ ಅವುಗಳಿಂದ ರಕ್ತಪ್ರವಾಹವು ದೊಡ್ಡ ಹೊಳೆಯಾಗಿ ಹರಿಯುವಂತೆ ಗಱ್ಱನೆ ತಿರುಗಿಸಿ, ಶ್ರೀಚಕ್ರಾಯುಧವನ್ನು ನಿಯಮಿಸುವುದರಲ್ಲಿ ಸಮರ್ಥನಾದ ಸರ್ವೇಶ್ವರನಿಗೆ ಮಂಗಳಾಶಾಸನವನ್ನು ಮಾಡಿ ಅವನ ಗುಣಾನುಭವವನ್ನು ಮಾಡೋಣ ಬನ್ನಿರಿ.

---

Gentlemen, having been stamped as His humble servants with the circular mark of His Discus, full of resplendent rays brighter and more powerful than those of the sun, the moon, or the fire, we have been for generations past, from time immemorial, devoting our hearty services in perpetuity to our Gracious Lord. Hence we shall all unite to offer our hymns of *benediction* to Him who owns in His right arm *that* powerful Discus, which weapon, when thrown at Bânâsura, who was contending with treacherous missiles, caused a stream of blood to flow profusely from his thousand injured arms.

ನೆಯ್ಯಿಡೈನಲ್ಲದೋರ್ಶೋಱುನಿಯತಮುಮತ್ತಾಣಿಚ್ಚೇವಕಮುಂ
ಕೈಯಡೈಕ್ಕಾಯುಂಕೞುತ್ತುಕ್ಕುಪ್ಪೂಣೊಡುಕಾದುಕ್ಕುಕ್ಕುಂಡಲಮುಂ
ಮೆಯ್ಯಿಡನಲ್ಲದೋರ್ಶಾಂದಮುಂತನ್ದೆನ್ನೈವೆಳ್ಳುಯಿರಾಕ್ಕವಲ್ಲ
ಪೈಯುಡೈನಾಹಪ್ಪಗೈಕ್ಕೊಡಿಯಾನುಕ್ಕುಪ್ಪಲ್ಲಾಣ್ಡುಕೂಱುವನೇ ‖ ೧೧ ‖

ಪ್ರತಿಪದಾರ್ಥ.

| | | | |
|---|---|---|---|
| ನೆಯ್ಯಿಡೈ | .... ಸಮಾನತೂಕದಘೃತವುಳ್ಳ | ನಲ್ಲದೋರ್ | .... ಅತ್ಯುತ್ತಮವಾದ |
| ನಲ್ಲದೋರ್ | .... ಬಿಳ್ಳಿಯದಾಗಿಯೂ ಇನಿದಾಗಿಯೂ ಇರುವ | ಶಾನ್ದಮುಂ | .... ವಾಸನೆಯುಳ್ಳ ಗಂಧವೂ—ಇವುಗಳನ್ನೆಲ್ಲಾ |
| ಶೋಱುಂ | ... ಬೋನವೂ, ಪ್ರಸಾದವೂ | ತನ್ದು | ... (ನನಗೆ ನಿರಂತರವಾಗಿ) ಕೊಟ್ಟು |
| ನಿಯತಮುಂ | .... ಯಾವಾಗಲೂ | | |
| ಅತ್ತಾಣಿ | .... ದಿವ್ಯಸಿಂಹಾಸನದ | ಎನ್ನೈ | ... ಭಕ್ತನಾದ ನನ್ನನ್ನು |
| ಶೇವಕಮುಂ | .... ಅವಿಚ್ಛಿನ್ನ ಸೇವೆಯೂ | ವೆಳ್ಳುಯಿರ್ | ... ಶುದ್ಧಸ್ವರೂಪನನ್ನಾಗಿ |
| ಕೈಯಡೈಕ್ಕಾಯುಂ | .... ಹಸ್ತದಲ್ಲಿ ಹಿಡಿದಿರುವ ತಾಂಬೂಲವೂ | ಆಕ್ಕವಲ್ಲ | ... ಮಾಡತಕ್ಕವನಾದ |
| | | ಪೈಯುಡೈ | ... ಹೆಡೆಯುಳ್ಳ |
| ಕೞುತ್ತುಕ್ಕು | .... ಕಂಠದಲ್ಲಿ (ಧರಿಸತಕ್ಕ) | ನಾಹಪ್ಪಗೈ | ... ಸರ್ಪವಿರೋಧಿಯಾದ ಗರುಡನನ್ನು [ಪತಿಗೆ |
| ಪೂಣೊಡು | .... ಕಂಠಿಕಾಭರಣವೂ | | |
| ಕಾದುಕ್ಕು | .... ಕಿವಿಯಲ್ಲಿ (ಇಟ್ಟುಕೊಳ್ಳಲು) | ಕೊಡಿಯಾನುಕ್ಕು | ... ಧ್ವಜದಲ್ಲಿ ಉಳ್ಳ ವೈಕುಂಠ |
| | | ಪಲ್ಲಾಣ್ಡು | ... ಮಂಗಳಾಶಾಸನವನ್ನು |
| ಕುಂಡಲಮುಂ | .... ಮಕರಕುಂಡಲವೂ | ಕೂಱುವನೇ | ... (ಯಾವಾಗಲೂ) ಹೇಳುವೆನು |
| ಮೆಯ್ಯಿಡ | .... ಮೈಗೆ ಹಚ್ಚಿಕೊಳ್ಳತಕ್ಕ | | |

ತಾತ್ಪರ್ಯ.

ಸರಿಗೆಸರಿಯಾದ ಘೃತದಿಂದಕೂಡಿದ ಇನಿದಾದ ಪ್ರಸಾದವೂ (ಬೋನವೂ) ಯಾವಾಗಲೂ ದಿವ್ಯ ಸಿಂಹಾಸನದ ಹತ್ತಿರ ಅವಿಚ್ಛಿನ್ನ ಸೇವೆಯೂ, ಹಸ್ತದಲ್ಲಿ ತುಂಬಾ ತಾಂಬೂಲವೂ, ಕಂಠದಲ್ಲಿ ಧರಿಸಲು ಯೋಗ್ಯವಾದ ಕಂಠಿಕಾಭರಣವೂ, ಕಿವಿಯಲ್ಲಿ ಇಟ್ಟುಕೊಳ್ಳಲು ತಕ್ಕ ಮಕರಕುಂಡಲವೂ, ಮೈಗೆ ಹಚ್ಚಿಕೊಳ್ಳಲು ಶೈತ್ಯಸೌರಭ್ಯದಿಂದ ಕೂಡಿದ ಅತ್ಯುತ್ತಮವಾದ ವಾಸನೆಯುಳ್ಳ ಶ್ರೀಗಂಧವೂ—ಇವೇ ಮುಂತಾದ ಐಹಿಕ ಭೋಗಂಗಳನ್ನು ಇಹದಲ್ಲಿ ನನಗೆ ನಿರಂತರವಾಗಿ ಕೊಟ್ಟದ್ದಲ್ಲದೆ, ಪರಮಭಕ್ತನಾದ ನನ್ನನ್ನು ಪರದಲ್ಲಿಯೂ ಶುದ್ಧಸ್ವರೂಪನನ್ನಾಗಿ ಮಾಡಲು ಶಕ್ತನಾದ ಆ ಗರುಡಧ್ವಜನಿಗೆ ನಾನು ಯಾವಾಗಲೂ ಮಂಗಳಾಶಾಸನವನ್ನು ಮಾಡುವೆನು, ಕೇಳಿರಿ ಚೇತನರೇ.

---

I shall (always) recite my prayers of benediction to our Gracious Lord Garudadhwaja (the Deity in whose banner is found the Great Kite as His insignia) who vouchsafed me not only all the items of happiness of this *mundane* world—such as flavoured rice (excellent food) sweetened with equal quantity of ghee, a respectable position during lifetime and an honorable seat near the throne, betel-leaf and nut in plenty, ornaments for the neck, earrings for the ear, and fragrant scents of sandal to smear all over the body—but also has the rare power of purifying my Soul.

ಉಡುತ್ತುಕ್ಕಳೈನ್ದನಿನ್ಪೀತಕವಾಡೈಯುಡುತ್ತುಕ್ಕಲತ್ತದುಂಡು
ತೊಡುತ್ತತುೞಾಯ್ಮಲರ್ಶೂಡಿಕ್ಕಳೈನ್ದನಶೂಡುಮಿತ್ತೊಣ್ಡರ್ಗಳೋಂ
ವಿಡುತ್ತತಿಶೈಕ್ಕರುಮನ್ತಿರುತ್ತಿತ್ತಿರುವೋಣತ್ತಿರುವಿೞವಿಲ್
ಪಡುತ್ತಪೈನ್ನಾಗಣೈಪ್ಪಳ್ಳಿಕೊಣ್ಡಾನುಕ್ಕುಪ್ಪಲ್ಲಾಣ್ಡುಕೂಱುದುಮೇ ‖೧೨‖

ಪ್ರತಿಪದಾರ್ಥ.

| | | | |
|---|---|---|---|
| ಉಡುತ್ತು | ... ಶ್ರೇಷ್ಠವಾದ ಮಧ್ಯಪ್ರದೇಶದಲ್ಲಿ ಧರಿಸಿ | ಇತ್ತೊಂಡರ್ಗಳೋಂ | ... ಇಲ್ಲಿ ನಿಂತಿರುವ ಭಕ್ತರಾದ ನಾವು |
| ಕಳೈನ್ದ | ... ತೆಗೆದಿಟ್ಟ | ವಿಡುತ್ತ | ... (ನೀನು) ನಿಯಮಿಸಿದ |
| ನಿನ್ಪೀತಕ ಆಡೈ | ... ನಿನ್ನ ಪೀತಾಂಬರವನ್ನು | ತಿಶೈಕ್ಕರುಮಂ | ... ದಿಕ್ಕುಗಳಲ್ಲಿ ಮಾಡತಕ್ಕ ಕಾರ್ಯಗಳನ್ನು |
| ಉಡುತ್ತು | ... ನಾವು ಉಟ್ಟುಕೊಂಡು | | |
| ಕಲತ್ತದು | ... ನೀನು ಭುಜಿಸಿದ ಪಾತ್ರದಲ್ಲಿ ಮಿಕ್ಕುದನ್ನು | ತಿರುತ್ತಿ | ... ಸರಿಯಾಗಿ ಮಾಡಿ |
| ಉಂಡು | ... ಪ್ರಸಾದವಾಗಿ ಸ್ವೀಕರಿಸಿ | ತಿರುವೋಣತ್ತಿರುವಿೞವಿಲ್ | ... ಶ್ರವಣ ನಕ್ಷತ್ರದ ಮಹೋತ್ಸವದಲ್ಲಿ |
| ತೊಡುತ್ತ | ... ಮಾಲೆಯಾಗಿ ಕಟ್ಟಿದ | ಪಡುತ್ತ | ... ಹಾಸುಗೆಯಾಗಿ ಹಾಸಿದ |
| ತುೞಾಯ್ಮಲರ್ | ... ಶ್ರೀತುಳಸೀ ಪುಷ್ಪವನ್ನು | ಪೈನ್ನಾಗಣೈ | ... ಹೆಡೆಯುಳ್ಳನಾಗಶಯನದಲ್ಲಿ |
| ಶೂಡಿಕ್ಕಳೈನ್ದನ | ... ನಿನಗೆ ಮುಡಿದು, ತರುವಾಯ ತೆಗೆದಿಟ್ಟುದನ್ನು | ಪಳ್ಳಿಕೊಂಡಾನುಕ್ಕು | ... ಯೋಗನಿದ್ರೆಮಾಡುವ ಸರ್ವಸ್ವಾಮಿಯಾದ ನಿನಗೆ |
| ಶೂಡುಂ | ... (ಪ್ರಸಾದವಾಗಿ) ತಲೆಯಲ್ಲಿ ಧರಿಸುವ | ಪಲ್ಲಾಣ್ಡು | ... ಮಂಗಳಾಶಾಸನವನ್ನು |
| | | ಕೂಱುದುಮೇ | ... ಹೇಳುತ್ತೇವೆ |

ತಾತ್ಪರ್ಯ.

ಎಲೈ ಸ್ವಾಮಿಯೇ, ಶ್ರೇಷ್ಠವಾದ ನಿನ್ನ ಮಧ್ಯಪ್ರದೇಶದಲ್ಲಿ ಧರಿಸಿ ತದನಂತರ ತೆಗೆದಿಟ್ಟ ನಿನ್ನ ಪೀತಾಂಬರವನ್ನು ನಾವು ಉಟ್ಟುಕೊಂಡೂ, ನೀನು ಭುಜಿಸಿದ ಪಾತ್ರದಲ್ಲಿ ಮಿಕ್ಕುದನ್ನು ದಾಸರಾದ ನಾವು ಪ್ರಸಾದವಾಗಿ ಸ್ವೀಕರಿಸಿಯೂ, ಮಾಲೆಯಾಗಿ ಕಟ್ಟಿದ ಶ್ರೀತುಳಸೀ ಪುಷ್ಪವನ್ನು ನಿನಗೆ ಸಮರ್ಪಿಸಿದ ತರುವಾಯ ತೆಗೆದಿಟ್ಟುದನ್ನು ನಾವು ಪ್ರಸಾದವಾಗಿ ಶಿರಸ್ಸಿನಲ್ಲಿ ಧರಿಸಿಕೊಂಡೂ ಇಲ್ಲಿ ನಿಂತಿರುವ ನಿನ್ನ ಭಕ್ತರಾದ ನಾವು, ನೀನು ನಿಯಮಿಸಿದ ಕಾರ್ಯಗಳನ್ನೆಲ್ಲಾ ಆಯಾಯ ದಿಕ್ಕುಗಳಲ್ಲಿ ಸರಿಯಾಗಿ ಮಾಡಿಕೊಂಡು, ನೀನು ಅವತರಿಸಿದ ನಕ್ಷತ್ರವಾದ ಶ್ರವಣನಕ್ಷತ್ರದ ಮಹೋತ್ಸವಕಾಲದಲ್ಲಿ, ಹಾಸುಗೆಯಾಗಿ ಹಾಸಿರುವ ನಾಗಪರ್ಯಙ್ಕದಲ್ಲಿ ಯೋಗನಿದ್ರೆಮಾಡುವ ಶ್ರೀಮನ್ನಾರಾಯಣನಾದ ನಿನಗೆ ನಾವು ಮಂಗಳಾಶಾಸನವನ್ನು ಮಾಡುತ್ತೇವೆ.

---

We who are Thy devotees, always wear, as tokens of Thy favour, no other garment than that golden cloth first used by Thee; similarly we always use as food nothing but what remains in Thy dish; and we always adorn our head with nothing but the *tulasi-flower* first worn by Thee. With such tokens, we have been carrying out Thy instructions in all directions, and under all circumstances. Finally, we offer our humble hymns *of benediction* to Thee, who hast condescended to come and remain in the milk-ocean on the auspicious Sravana-day, taking Thy bedding on the soft thousand-hooded Serpent Ananta, and enjoying an *apparently unconscious sleep.*

ಎನ್ನಾಳೆಂಬೆರುಮಾನುನ್ದನಕ್ಕಡಿಯೋಮೆನ್ರೆೞುತ್ತುಪ್ಪಟ್ಟ
ವನ್ನಾಳೇಯಡಿಯೋಙ್ಗಳಡಿಕ್ಕುಡಿಲ್ವೀಡುಪೆಱ್ಱುಯ್ನ್ದದುಕಾಣ್
ಶೆನ್ನಾಡೋಱ್ಱಿತ್ತಿರುಮದುರೈಯುಳ್ಶಿಲೈಕುನಿತ್ತೈನ್ದಲೈಯ
ಪೈನ್ನಾಕತ್ತಲೈಪ್ಪಾಯ್ನ್ದವನೇಯುನ್ನೈಪ್ಪಲ್ಲಾಣ್ಡುಕೂಱುದುಮೇ ॥ ೧೪ ॥

ಪ್ರತಿಪದಾರ್ಥ.

| | | | |
|---|---|---|---|
| ಎನ್ನಾಳ್ | ... ಯಾವ ದಿವಸದಲ್ಲಿ | ಶೆನ್ನಾಳ್ | ... ಮಂಗಳವಾದ ದಿವಸದಲ್ಲಿ |
| ಎಂಬೆರುಮಾನ್ | ... ಎಮ್ಮ ಸ್ವಾಮಿಯೇ | ತೋಱ್ಱಿ | ... (ಕೃಷ್ಣನಾಗಿ) ಅವತರಿಸಿ |
| ಉನ್ದನಕ್ಕು | ... ಸರ್ವೇಶ್ವರನಾದ ನಿನಗೆ | ತಿರುಮದುರೈಯುಳ್ | ... ಶ್ರೀಮಧುರಾಪುರಿಯಲ್ಲಿ |
| ಅಡಿಯೋಂ, ಎನ್ರು | ... (ನಾವು) ಶೇಷಭೂತರೆಂದು | ಶಿಲೈ | ... ಬಿಲ್ಲನ್ನು [ಯುದ್ಧಮಾಡಿ |
| ಎೞುತ್ತುಪ್ಪಟ್ಟ | ... ದಾಸ್ಯಭಾವದ ಚೀಟಿಯು ಬರೆಯಲ್ಪಟ್ಟಿತೋ | ಕುನಿತ್ತು | ... ಬಗ್ಗಿಸಿ ಶತ್ರುಗಳೊಡನೆ |
| | | ಐನ್ದಲೈಯ | ... ಐದು ತಲೆಗಳುಳ್ಳ |
| ಅನ್ನಾಳೇ | ... ಆ ದಿವಸವೇ | ಪೈನ್ನಾಗ | ... ವಿಷಮಯನಾದ ಕಾಳಿಂಗನೆಂಬ ಮಹಾನಾಗನನ್ನು |
| ಅಡಿಯೋಂಗಳ್ | ... ಭಕ್ತರಾದ ನಾವೂ | | |
| ಅಡಿಕ್ಕುಡಿಲ್ | ... ನಮಗೆಸೇರಿದ ಪುತ್ರಪೌತ್ರಾದಿಗಳೂ ಶಾಖಾನಗರದವರೂ | ತಲೈಪ್ಪಾಯ್ನ್ದವನೇ | ... ತಲೆಯಮೇಲೆ ಧುಮುಕಿ ಜಗ್ಗಿಸಿದವನೇ |
| | | ಉನ್ನೈ | ... ನಿನಗೆ |
| ವೀಡುಪೆಱ್ಱು | ... ಮೋಕ್ಷವನ್ನೊಂದಿ (ಸಂಸಾರಬಂಧವನ್ನು ಬಿಟ್ಟು) | ಪಲ್ಲಾಣ್ಡು | ... ಮಂಗಳಾಶಾಸನವನ್ನು |
| | | ಕೂಱುದುಮೇ | ... ಮಾಡುವೆವು |
| ಉಯ್ನ್ದದುಕಾಣ್ | ... ಉಜ್ಜೀವಿಸಿದರಲ್ಲವೆ ! | | |

ತಾತ್ಪರ್ಯ.

ಎಮ್ಮನ್ನೆಲ್ಲಾ ಆಳತಕ್ಕ ಸ್ವಾಮಿಯೇ, ಸರ್ವೇಶ್ವರನಾದ ನಿನಗೆ ಯಾವ ದಿವಸದಲ್ಲಿ ನಾವೆಲ್ಲಾ ಶೇಷಭೂತರೆಂದು ದಾಸ್ಯಭಾವದ ಲೇಖನವು ಗುರುತುಮಾಡಲ್ಪಟ್ಟಿತೋ, ಆ ದಿವಸವೇ ಭಕ್ತರಾದ ನಾವೂ ನಮಗೆ ಸೇರಿದ ಪುತ್ರಮಿತ್ರಕಳತ್ರಾದಿಗಳೂ ಶಾಖಾನಗರದವರೂ, ಸಂಸಾರಬಂಧವನ್ನು ಬಿಟ್ಟು ಮೋಕ್ಷಸುಖವನ್ನು ಹೊಂದಿ ಉಜ್ಜೀವಿಸಿದೆವಲ್ಲವೆ! ರೋಹಿಣೀನಕ್ಷತ್ರದ ಶುಭದಿವಸದಲ್ಲಿ ನೀನು ಶ್ರೀಮಧುರಾಪುರಿಯಲ್ಲಿ ಕೃಷ್ಣನಾಗಿ ಅವತರಿಸಿ, ತರುವಾಯ ನರಕಜರಾಸಂಧಾದಿ ಶತ್ರುಗಳಮೇಲೆ ನಿನ್ನ ದಿವ್ಯಧನುಸ್ಸನ್ನು ಸನ್ಧಾನಮಾಡಿ ಅವರನ್ನು ಅಡಗಿಸಿ ಜಯಿಸಿದ್ದಲ್ಲದೆ, ಐದು ತಲೆಯುಳ್ಳ ವಿಷಮಯನಾದ ಕಾಳಿಂಗನೆಂಬ ಮಹಾಸರ್ಪನ ತಲೆಯಮೇಲೆ ಧುಮುಕಿನಿಂತು ಜಗ್ಗಿಸಿದವನೇ, ನಿನಗೆ ನಾವು ಮಂಗಳಾಚರಣೆಯನ್ನು ಹೇಳಿ, ನಿನ್ನ ಗುಣಾನುಭವವನ್ನು ಮಾಡುತ್ತೇವೆ.

---

The very day on which, O Gracious Lord, the document to the effect that we have entered Thy service as Thy Humble devotees for ever and ever, was executed, ourselves as well as our posterity, friends, relatives &c., obtained salvation of course, and commenced to enjoy eternal bliss. Having incarnated as Krishna on the auspicious day (in the Rôhini Asterism), Thou hast successfully bent the strong bow in the city of sacred Madhura (Muttra) to vanquish Thy enemies—Jarâsandha, Narakâsura and others. O Destroyer of the five-hooded venomous serpent (Kâlinga) with a violent jump upon his head ! let us sing hymns of *benediction* to Thee.

ಅಲ್ವಳಿಕ್ಕೊನ್ರುಮಿಲ್ಲಾವಣಿಕೋಟ್ಟಿಯರ್ಕ್ಕೋನ್ ಅಬಿಮಾನತುಂಗನ್
ಶೆಲ್ವನೈಪ್ಪೋಲತ್ತಿರುಮಾಲೇನಾನುಮುನಕ್ಕುಪ್ಪಳವಡಿಯೇನ್
ನಲ್ವಕೈಯಾಲ್ ನಮೋನಾರಾಯಣಾವೆನ್ರು ನಾಮಂಪಲಪರವಿ
ಪ್ಪಲ್ವಕೈಯಾಲುಂಪವಿತ್ತಿರನೇಯುನ್ನೈ ಪ್ಪಲ್ಲಾಣ್ಡುಕೂಱುವನೇ ‖ ೧೪ ‖

ಪ್ರತಿಪದಾರ್ಥ.

| | | | |
|---|---|---|---|
| ಅಲ್ವಳಿಕ್ಕು | ...ನೀತಿರಹಿತವಾದ ಆಚಾರಗಳಲ್ಲಿ | ನಮಃ | ... ನಾನು ಎನಗೆ ಸ್ವತಂತ್ರನಲ್ಲ (ಸ್ವಾಮಿಗೆ ಅಧೀನನು) |
| ಒನ್ರುಂ ಇಲ್ಲಾ | ... ಯಾವುದೂ ಇಲ್ಲದ | | |
| ಅಣಿ | ... ಸುಂದರವಾದ | ನಾರಾಯಣಾ | ... ಸರ್ವಸ್ವಾಮಿಯೇ |
| ಕೋಟ್ಟಿಯರ್ಕೋನ್ | ... ತಿರುಕ್ಕೋಟ್ಟಿಯೂರ್ ನಿವಾಸಿಗಳಿಗೆ ನಾಯಕನಾದ | ಎನ್ರು | ... ಎಂದು |
| | | ನಾಮಂಪಲ | ... ನಿನ್ನ ಅನೇಕ ದಿವ್ಯ ನಾಮಂಗಳನ್ನು |
| ಅಬಿಮಾನತುಂಗನ್ | ... ಅಭಿಮಾನದಿಂದ ಉತ್ಕೃಷ್ಟನಾದ | ಪರವಿ | ... ಅನುಸಂಧಾನಮಾಡಿ |
| | | ಪಲ್ವಕೈಯಾಲುಂ | ... ಸರ್ವ ಪ್ರಕಾರದಲ್ಲಿಯೂ |
| ಶೆಲ್ವನೈಪ್ಪೋಲ | ... ಶೆಲ್ವನಂಬಿಯಹಾಗೆ | ಪವಿತ್ತಿರನೇ | ... ಪರಿಶುದ್ಧಸ್ವರೂಪನೇ |
| ತಿರುಮಾಲೇ | ... ಶ್ರಿಯಃಪತಿಯಾದಸ್ವಾಮಿ | ಉನ್ನೈ | ... ನಿನಗೆ |
| ನಾನುಂ | ... ಶೇಷಭೂತನಾದ ನಾನೂ | ಪಲ್ಲಾಣ್ಡು | ... ಮಂಗಳಾಶಾಸನವನ್ನು |
| ಉನಕ್ಕು | ... ಶೇಷಿಯಾದ ನಿನಗೆ | ಕೂಱುವನ್ | .... ಮಾಡುತ್ತೇನೆ |
| ಪಳವಡಿಯೇನ್ | ... ಪುರಾತನ ಕಿಂಕರನು | ಏ | ... (ಪಾದಪೂರಣಕ್ಕಾಗಿ ಕೊನೆಗೆ ಬರುವ) ನಿಪಾತ |
| ನಲ್ವಕೈಯಾಲ್ | ... ಒಳ್ಳೆಯ ಉಪಾಯದಿಂದ | | |

ತಾತ್ಪರ್ಯ.

ಎಲೈ ಶ್ರೀಯಃಪತಿಯಾದ ಸ್ವಾಮಿಯೇ, ನೀತಿರಹಿತಾಚಾರಗಳಲ್ಲಿ ಯಾವುದೂ ಇಲ್ಲದೆ ಸದಾಚಾರ ಸಂಪನ್ನವಾಗಿಯೂ ಸುಂದರವಾಗಿಯೂ ಇರುವ ತಿರುಕ್ಕೋಟ್ಟಿಯೂರಿನ ನಿವಾಸಿಗಳಿಗೆ ನಾಯಕನಾಗಿಯೂ, ನಿನಗೆ "ಪರಮಭಕ್ತ" ನೆಂಬ ಅಭಿಮಾನದಿಂದ ಉತ್ಕೃಷ್ಟನಾಗಿಯೂ ಇರುವ ಶೆಲ್ವನಂಬಿಯಹಾಗೆ ಶೇಷಭೂತನಾದ ನಾನೂ, ಶೇಷಿಯಾದ ನಿನಗೆ ಅನಾದಿಕಾಲದಿಂದಲೂ ಕಿಂಕರನಾಗಿದ್ದೇನೆ. ಆದಕಾರಣ, ಎಲೈ ಸರ್ವಸ್ವಾಮಿಯೇ, ಶುದ್ಧ ಸ್ವರೂಪನೇ, 'ನಾನು ಎನಗೆ ಸ್ವತಂತ್ರನಲ್ಲ, ಯಾವಾಗಲೂ ನಿನಗೇ ಅಧೀನನು'–ಹೀಗೆಂಬ ಶ್ರೇಷ್ಠವಾದ ಉಪಾಯವನ್ನು ಅವಲಂಬಿಸಿ ನಿನ್ನ ದಿವ್ಯಸಹಸ್ರ ನಾಮಂಗಳನ್ನು ಸರ್ವಪ್ರಕಾರದಲ್ಲಿಯೂ ಅನುಸಂಧಾನಮಾಡಿ ನಿನಗೆ ಮಂಗಳಾಶಾಸನವನ್ನು ಸರ್ವದಾ ಮಾಡುತ್ತೇನೆ.

---

I have been, O Tirumâl (Consort of Lakshmi), as dutiful a devotee to Thee as Selva Nambi—the proudest of Thy devotees, and the King of the beautiful city of Tirukkôttiyûr, where (owing to his pious and high character) low morals do not prevail; and I shall therefore recite day and night Thy many thousand names-such as Namô Nârâyanâ &c.; and always sing, O Pure Spirit, hymns of *benediction* in Thy praise in all manner of ways.

ಪಲ್ಲಾಣ್ಡೆನ್ರುಪವಿತ್ತಿರನೈಪ್ಪರಮೇಟ್ಟಿಯೈಚ್ಚಾರ್ಙ್ಗಮೆನ್ನುಂ
ವಿಲ್ಲಾಣ್ಡಾನ್ರನ್ನೈ ವಿಲ್ಲಿಪುತ್ತೂರ್ವಿಟ್ಟುಚಿತ್ತನ್ವಿರುಂಬಿಯಶೊಲ್
ನಲ್ಲಾಣ್ಡೆನ್ರುನವಿನ್ರುರೈಪ್ಪಾರ್ನಮೋನಾರಾಯಣಾಯವೆನ್ರು
ಪಲ್ಲಾಣ್ಡುಂಪರಮಾತ್ಮನೈಚ್ಚೂಳ್ನ್ದಿರುನ್ದೇತ್ತುವರ್ಪಲ್ಲಾಣ್ಡೇ ‖ ೧೨ ‖

ಪ್ರತಿಪದಾರ್ಥ.

| | | | |
|---|---|---|---|
| ಪಲ್ಲಾಣ್ಡು ಎನ್ರು | ... "ಪಲ್ಲಾಣ್ಡು" (ಮಂಗಳಾ ಶಾಸನ) ಎಂದು | ನಲ್ಲಾಣ್ಡು ಎನ್ರು | ... (ಅನುಸಂಧಾನ ಮಾಡಲು) ಇದು ಯೋಗ್ಯವಾದ ಸಮಯವೆಂದು [ತಿ |
| ಪವಿತ್ತಿರನೈ | ... ಶುದ್ಧ ಸ್ವರೂಪನಾದ ಸರ್ವೇಶ್ವರನನ್ನು | ನವಿನ್ರು | ... ನಿಷ್ಕರ್ಷಿಸಿ, ಸಿದ್ಧಾಂತಮಾ |
| ಪರಮೇಟ್ಟಿಯೈ | ... ಪರಮಪದವಾಸಿಯಾದ ಸ್ವಾಮಿಯನ್ನು | ಉರೈಪ್ಪಾರ್ | ... ಪಾರಾಯಣಮಾಡುವವರು |
| ಶಾರ್ಙ್ಗಂಎನ್ನುಂ | ... ಶ್ರೀಶಾರ್ಙ್ಗವೆಂಬ | ನಮೋ ನರಾಯಣಾಯ ಎನ್ರು | "ನಮೋನಾರಾಯಣಾಯ" ಎಂದು ಅಡಿಗಡಿಗೆ ಹೇಳಿ |
| ವಿಲ್ಲಾಣ್ಡಾನ್ ತನ್ನೈ | ... ಧನುಸ್ಸನ್ನು ತನ್ನ ದಿವ್ಯ ಹಸ್ತದಲ್ಲಿ ಉಳ್ಳವನನ್ನು | ಪಲ್ಲಾಣ್ಡುಂ | ... ಅನೇಕ ವರ್ಷಗಳು (ಕಾಲತತ್ವವಿರುವವರಿಗೂ) |
| ವಿಲ್ಲಿಪುತ್ತೂರ್ | ... ವಿಲ್ಲಿಪುತ್ತೂರೆಂಬ ನಗರದ | ಪರಮಾತ್ಮನೈ | ... ಶ್ರೀಸರ್ವಸ್ವಾಮಿನ್ಯರನನ್ನು |
| ವಿಟ್ಟುಚಿತ್ತನ್ | ... ಶ್ರೀ ವಿಷ್ಣುಚಿತ್ತರು | ಶೂಳ್ನ್ದು | ... ಸಮಾಪಿಸಿ |
| ವಿರುಂಬಿಯ | ... ಅಭಿಮಾನಿಸಿ ಅಪ್ಪಣೇ ಕೊಡಿಸಿದ | ಇರುನ್ದು | ... ಗೋಷ್ಠಿಯಾಗಿ ನಿಂತು |
| | | ಏತ್ತುವರ್ | ... ಸ್ತುತಿಸುವರು |
| ಶೊಲ್ | ... (ಪಲ್ಲಾಣ್ಡು) ಪದ್ಯಗಳನ್ನು | ಪಲ್ಲಾಣ್ಡೇ | ... ಮಂಗಳಾಶಾಸನವನ್ನು |

ತಾತ್ಪರ್ಯ.

ಶುದ್ಧ ಸ್ವರೂಪನಾಗಿಯೂ ಶ್ರೀ ವೈಕುಂಠಪತಿಯಾಗಿಯೂ ಶ್ರೀ ಶಾರ್ಙ್ಗವೆಂಬ ಧನುಸ್ಸನ್ನು ದಿವ್ಯ ಹಸ್ತದಲ್ಲಿ ಧರಿಸಿರುವನಾಗಿಯೂ ಇರುವ ಶ್ರಿಯಃಪತಿಯನ್ನು ಕುರಿತು ವಿಲ್ಲಿಪುತ್ತೂರ್ ನಗರದ ಶ್ರೀ ವಿಷ್ಣುಚಿತ್ತರೆಂಬ ಪೆರಿಯಾಳ್ವಾರವರು ಭಕ್ತಿಪಾರವಶ್ಯದಿಂದ ಅಪ್ಪಣೇಕೊಡಿಸಿದ "ಪಲ್ಲಾಣ್ಡು" (ಮಂಗಳಾಶಾಸನ) ಸೂಕ್ತಿಗಳನ್ನು ಅರ್ಥಸಹಿತ ಅನುಸಂಧಾನಮಾಡುವ ಸಮಯವೇ ಸಾರ್ಥಕವಾದ ಸಮಯವೆಂದು ಪರಿಭಾವಿಸಿ ಕಾಲಕ್ಷೇಪ ಮಾಡುವವರು, "ನಮೋನಾರಾಯಣಾಯ" ಎಂಬ ಮಂತ್ರವನ್ನು ಅಡಿಗಡಿಗೆ ಪುನಶ್ಚರಣ ಮಾಡಿ, ಕಾಲತತ್ವವಿರುವವರಿಗೂ ಶ್ರೀ ಸರ್ವಸ್ವಾಮಿನ್ಯರನನ್ನು ಸಮಾಪಿಸಿ ಗೋಷ್ಠಿಯಾಗಿ ನಿಂತು ಅವನಿಗೆ ನಿರಂತರದಲ್ಲಿಯೂ ಮಂಗಳಾಶಾಸನವನ್ನು ಮಾಡತಕ್ಕ ಉತ್ಕೃಷ್ಟಪದವಿಯನ್ನು ಹೊಂದುವರು.

---

These hymns of benediction, well-known as **"Pallandu"** (may Thou live long) were composed by *Saint Vishnuchitta alias* Periyâlvâr of Villiputtûr, and most lovingly and piously dedicated to the Lord, The Purest Spirit, Lord of Vaikuntha, and the Bearer of Sarñga-bow. Those who zealously recite such hymns with due appreciation of the noble thoughts therein found, in the belief that the time devoted to such recitation is the happiest and most sublime moment of their lives, will be honoured with unenviable seats near the Celestial Throne, and the high privilege of proclaiming, as a united band, in praise of the Almighty Lord, for ever and ever, halleluiahs consisting chiefly of the constant recital of the Holy Mantra of "*Namô Nârâyanâya*" (I am never for *me*, but for *Nârâyana* always).

# ಪೆರಿಯಾೞ್ವಾರವರ

## ವಾೞಿತ್ತಿರುನಾಮಂ.

ನಲ್ಲತಿರುಪ್ಪಲ್ಲಾಣ್ಡು ನಾನ್ಮೂನ್ಱೋನ್ವಾೞಿಯೇ
ನಾನೂಱ್ಱಿರುಪತ್ತೊನ್ಱು ನಮಕ್ಕುರೈತ್ತಾನ್ವಾೞಿಯೇ

ಶೊಲ್ಲರಿಯವಾನಿತನಿಱ್ ಶೋದಿವನ್ದಾನ್ವಾೞಿಯೇ
ತೊಡೈಶೂಡಿಕ್ಕೊಡುತ್ತಾಳೈ ತ್ತೊೞುದಪ್ಪನ್ವಾೞಿಯೇ

ಶೆಲ್ವನಂಬಿತನ್ನೈಪ್ಪೋಲಚ್ಚಿ ಱಪ್ಪುಱ್ಱಾನ್ವಾೞಿಯೇ
ಶೆನ್ನ್ಕಿೞಿಯಱುತ್ತುಮಾಲ್ ತೆಯ್ವಮೆನ್ಱಾನ್ವಾೞಿಯೇ

ವಿಲ್ಲಿಪುತ್ತೂರ್ನಹರತ್ತೈ ವಿಳಙ್ಗವೈತ್ತಾನ್ವಾೞಿಯೇ
ವೇದಿಯರ್ಕೋನ್ಪಟ್ಟರ್ ಪಿರಾನ್ಮೇದಿನಿಯಿಲ್ವಾೞಿಯೇ.

# THE NITYÂNUSANDHÂNAM SERIES.

| | | | | | |
|---|---|---|---|---|---|
| 1. | Tiruppallandu (ತಿರುಪ್ಪಲ್ಲಾಣ್ಡು) ... ... ... ... ... | ... | 0 | 3 | 0 |
| 2. | — Do. — (with English Translation)... ... ... | ... | 0 | 4 | 0 |
| 3. | Tirupaḷḷi Yeḻuchchi (ತಿರುಪ್ಪಳ್ಳಿಯೆೞುಚ್ಚಿ) ... ... ... | ... | 0 | 3 | 0 |
| 4. | — Do. — do. (with English Translation) ... ... | ... | 0 | 4 | 0 |
| 5. | Tiruppavai with swapadesartham (ತಿರುಪ್ಪಾವೈ) (*in the Press*) | ... | 1 | 0 | 0 |
| 6. | — Do. — (with English Translation) do. | ... | 1 | 8 | 0 |
| 7. | Adhikara Sangraham (Desikar's) (ಅಧಿಕಾರಸಙ್ಗ್ರಹಂ) do. | ... | 1 | 0 | 0 |
| 8. | — Do. — (with English Translation) do. | ... | 1 | 8 | 0 |

Other Parts, one of which is devoted to "a **Critical inquiry** into the **Age** and **Writings of the Alvars,**" are being made ready for the Press. Further particulars will be notified in due course.

A **discount** of **10** per cent. will be allowed for all orders of fifty copies and upwards.

Copies can be had of (1) Messrs. Srinivasa, Varadachari & Co., Madras; (2) S. Biligiri Aiyangar, Esq. Attorney-at-Law, Castle Kernan, Madras; (3) Messrs. Pushparatha Chetty & Co., Madras; (4) L. Srinivasaiengar, Esq., Advocate, Bangalore City; and (5) The undersigned—

**M. B. SRINIVASA AIYANGAR, M. A.,**
*Headmaster, High School, Kolar.*

*June 1898.*